## ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1139 + 144

02. ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ
(ವಿಧಾನ ಸಭೆಯಿಂದ ಚುನಾಯಿತರಾದವರು)

ಶ್ರೀ ಕೆ.ಎ. ತಿಪ್ಪೇಸ್ವಾಮಿ
(ನಾಮ ನಿರ್ದೇಶನ ಹೊಂದಿದವರು)

03. ಉತ್ತರಿಸುವ ದಿನಾಂಕ : 23-12-2021

04. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಭಾರಿ ಪ್ರಚಲಿತದಲ್ಲಿರುವ ಮತ್ತು ಸಂಚಲನ ಮೂಡಿಸಿರುವ ಬಿಟ್ ಕಾಯಿನ್ ಪ್ರಕರಣದಲ್ಲಿನ ಆರೋಪಿಯೊಂದಿಗೆ ರಾಜ್ಯದ ಪ್ರಭಾವಿ ರಾಜಕಾರಣಿಗಳು, ಮಂತ್ರಿಗಳು ಮತ್ತು ಹಿರಿಯ ಅಧಿಕಾರಿಗಳು ಶಾಮೀಲು ಆಗಿದ್ದಾರೆ ಮತ್ತು ಆರೋಪಿ ಅಕ್ರಮವಾಗಿ ಕದ್ದಿರುವ ಬಿಟ್ ಕಾಯಿನ್‌ಗಳಲ್ಲಿ ಮೇಲೆ ತಿಳಿಸಿದ ಎಲ್ಲರಿಗೂ ಪಾಲು ಹೋಗಿದೆ ಎನ್ನುವ ಆರೋಪ ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ರಾಜ್ಯ ಸರ್ಕಾರ ತನಿಖೆ ಒಳಗೊಂಡಂತೆ ನಿರ್ವಹಿಸಿರುವ ಜವಾಬ್ದಾರಿ ಮತ್ತು ತನಿಖೆಗಳು ಯಾವುವು; (ಸಂಪೂರ್ಣ ಮಾಹಿತಿ ನೀಡುವುದು) | ಇಲ್ಲ. |
| ಆ | ಈ ಪ್ರಕರಣದ ಆರೋಪಿಯನ್ನು ಯಾವಾಗ ಬಂಧಿಸಲಾಗಿದೆ ಮತ್ತು ಈ ವ್ಯಕ್ತಿಯ ವಿರುದ್ಧ ದಾಖಲಿಸಿರುವ ಮೊಕದ್ದಮೆಗಳು ಯಾವುವು; ಈ ಪ್ರಕರಣದ ತನಿಖೆ ಯಾವ ಹಂತದಲ್ಲಿದೆ ಹಾಗೂ ಈ ತನಿಖಾ ತಂಡದ ಮುಖ್ಯಸ್ಥರು ಯಾರು; (ಪ್ರಕರಣದಲ್ಲಿ ಇದುವರೆಗೂ ನಡೆದಿರುವ | ಆರೋಪಿತ ಶ್ರೀಕೃಷ್ಣ @ ಶ್ರೀಕಿ ಯನ್ನು ಕೆ.ಜಿ. ನಗರ ಪೊಲೀಸ್ ಠಾಣೆ ಮೊ.ಸಂ. 91/2020 ಕಲಂ 20(ಬಿ), 23(ಬಿ), 24, 25, 27, 27(ಇ), 29 ಎನ್.ಡಿ.ಪಿ.ಎಸ್ ಆಕ್ಟ್ (ಡ್ರಗ್ಸ್ ಅಕ್ರಮ ಸರಬರಾಜು) ಪ್ರಕರಣದಲ್ಲಿ ದಿನಾಂಕ 17.11.2020 ರಂದು ದಸ್ತಗಿರಿ ಮಾಡಲಾಗಿತ್ತು.<br>ಶ್ರೀಕೃಷ್ಣ @ ಶ್ರೀಕಿ ವಿರುದ್ಧ ದಾಖಲಾಗಿರುವ ಪ್ರಕರಣಗಳು ಹಾಗೂ ಪ್ರಕರಣಗಳ ತನಿಖಾ ಹಂತವನ್ನು **ಅನುಬಂಧದಲ್ಲಿ** ನೀಡಲಾಗಿದೆ. |

| | | |
|---|---|---|
| | ವಿದ್ಯಮಾನಗಳನ್ನು ಒಳಗೊಂಡಂತೆ ಸಂಪೂರ್ಣ ಮಾಹಿತಿ ನೀಡುವುದು) | ಆರೋಪಿತ ಶ್ರೀಕೃಷ್ಣ @ ಶ್ರೀಕಿ ವಿರುದ್ಧ ದಾಖಲಾಗಿರುವ ಪ್ರಕರಣಗಳ ತನಿಖೆಗೆ ಯಾವುದೇ ವಿಶೇಷ ತನಿಖಾ ತಂಡವನ್ನು ನೇಮಕ ಮಾಡಿರುವುದಿಲ್ಲ. ಸದರಿ ಪ್ರಕರಣಗಳ ತನಿಖೆಯನ್ನು ತನಿಖಾಧಿಕಾರಿಗಳು ನಿರ್ವಹಿಸಿದ್ದು, ಸಂಬಂಧಪಟ್ಟ ಸಹಾಯಕ ಪೊಲೀಸ್ ಆಯುಕ್ತರು, ಉಪ ಪೊಲೀಸ್ ಆಯುಕ್ತರುಗಳು, ಜಂಟಿ /ಅಪರ ಪೊಲೀಸ್ ಆಯುಕ್ತರುಗಳು ಹಾಗೂ ಪೊಲೀಸ್ ಆಯುಕ್ತರು ಕಾಲಕಾಲಕ್ಕೆ ತನಿಖೆಯ ಮೇಲ್ವಿಚಾರಣೆಯನ್ನು ನಿರ್ವಹಿಸಿರುತ್ತಾರೆ. |
| ಇ | ಕ್ರಿಪ್ಟೊ ಕರೆನ್ಸಿಗಳು ಭೌತಿಕ ರೂಪದಲ್ಲಿ ಇಲ್ಲದೆ, ವರ್ಚುಲ್ ಕರೆನ್ಸಿಗಳಾಗಿದ್ದು, ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಚಾಲನೆಯಲ್ಲಿ ಇದ್ದು, ಈ ಪ್ರಕರಣದ ಆರೋಪಿ ವಿವಿಧ ರಾಷ್ಟ್ರಗಳ ನಾಗರೀಕರ ವ್ಯಾಲೇಟ್‌ನಿಂದ ಕದ್ದಿರುವುದಾಗಿ ವರದಿಯಾಗಿರುವುದರಿಂದ ಈ ಪ್ರಕರಣದ ತನಿಖೆಯನ್ನು ಕೇಂದ್ರ ಸರ್ಕಾರದ ಆರ್ಥಿಕ ಇಲಾಖೆ ಜಾರಿ ನಿರ್ದೇಶನಾಲಯದ ಮುಖೇನ ಇಂಟರ್ ಪೋಲ್‌ಗೆ ವಹಿಸಲು ರಾಜ್ಯ ಸರ್ಕಾರ ಮುಂದಾಗುವುದೇ? (ಸಂಪೂರ್ಣ ಮಾಹಿತಿ ನೀಡುವುದು) | ಆರೋಪಿ ಶ್ರೀಕೃಷ್ಣ @ ಶ್ರೀಕಿ ಈತನು ಸ್ಥಳೀಯ ಹಾಗೂ ಅಂತರರಾಷ್ಟ್ರೀಯ ವೆಬ್‌ಸೈಟ್ ಹಾಗೂ ಕ್ರಿಪ್ಟೋ ಕರೆನ್ಸಿ ವಾಲೆಟ್‌ಗಳನ್ನು ಹ್ಯಾಕ್ ಮಾಡಿ ಬಿಟ್ ಕಾಯಿನ್‌ಗಳನ್ನು ಕದ್ದಿರುವುದಾಗಿ ತನ್ನ ಸ್ವ ಇಚ್ಛಾ ಹೇಳಿಕೆಯಲ್ಲಿ ತಿಳಿಸಿರುತ್ತಾನೆ. ಇದರ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಹಾಗೂ ಇಂಟರ್‌ಪೋಲ್‌ಗೆ ಮಾಹಿತಿ ನೀಡಲು ಕೋರಿ, ಸಿ.ಐ.ಡಿ. ಹಾಗೂ ಸಿ.ಬಿ.ಐ. ಮುಖಾಂತರ ದಿನಾಂಕ 28.04.2021/05.04.2021 ರಂದು ಪತ್ರ ಬರೆಯಲಾಗಿದೆ ಹಾಗೂ ಈ ಪ್ರಕರಣದ ಸಂಪೂರ್ಣ ಮಾಹಿತಿ / ದಾಖಲಾತಿಗಳನ್ನು ಜಾರಿ ನಿರ್ದೇಶನಾಲಯದ ಅಧಿಕಾರಿಗಳಿಗೆ ದಿನಾಂಕ 03.03.2021 ರಂದು ನೀಡಲಾಗಿದೆ. |

HD 48PCQ2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು

## ಅನುಬಂಧ

### ಶ್ರೀಕೃಷ್ಣ@ ಶ್ರೀಕಿ ವಿರುದ್ಧ ದಾಖಲಾಗಿರುವ ಪ್ರಕರಣಗಳ ಪಟ್ಟಿ

| ಕ್ರ ಸಂ | ಪೊಲೀಸ್ ಠಾಣೆ, ಮೊ. ಸಂ. & ಕಲಂ | ವರದಿಯ ದಿನಾಂಕ | ಪಿರ್ಯಾದುದಾರರು | ಪ್ರಕರಣದ ಪ್ರಸ್ತುತ ಹಂತ |
|---|---|---|---|---|
| 1 | ಕಬ್ಬನ್ ಪಾರ್ಕ್ ಪೊಲೀಸ್ ಠಾಣೆ ಮೊ ಸಂ 22/2018 ಕಲಂ 143, 144, 147, 148, 341, 323, 326, 504, 307 506(ಬಿ) ರೆ:ವಿ 149 ಐಪಿಸಿ | 18.02.2018 | ಶ್ರೀ ಪ್ರವೀಣ್ ವೆಂಕಟಾಚಲಯ್ಯ | ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗಿದ್ದು, ಘನ ಉಚ್ಚ ನ್ಯಾಯಾಲಯದಲ್ಲಿ ವಿಚಾರಣೆಗೆ ತಡೆಯಾಜ್ಞೆ ಇರುತ್ತದೆ. |
| 2 | ಸಿಐಡಿ ಸೈಬರ್ ಕ್ರೈಂ ಪೊಲೀಸ್ ಠಾಣೆ ಮೊ ಸಂ 09/2019 ಕಲಂ 66, 66(ಸಿ), 66(ಡಿ) 43 ಐಟಿ ಆಕ್ಟ್ ಮತ್ತು 419, 420 ಐಪಿಸಿ | 07.08.2019 | ಶೈಲಜಾ ಎಸ್ ಕೆ, ಆರ್ಥಿಕ ಸಲಹೆಗಾರರು, ಈ-ಪ್ರೋಕ್ಯೂರ್ಮೆಂಟರ್ ಕೋಶ., | ಸಿಐಡಿ ತನಿಖೆಯಲ್ಲಿರುತ್ತದೆ. |
| 3 | ಕೆಂಪೆಗೌಡನಗರ 91/2020 ಕಲಂ 20(ಬಿ), 23(ಬಿ), 24, 25, 27, 27(ಇ), 29 ಎನ್‌ಡಿಪಿಎಸ್ ಆಕ್ಟ್ | 04.11.2020 | ಶ್ರೀಧರ್ ಕೆ ಪೂಜಾರ್, ಪಿಐ ಸಿಸಿಬಿ, ಬೆಂಗಳೂರು ನಗರ | ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗಿದೆ. ಸಿಸಿ ನಂಬರ್ ಬಾಕಿ ಇರುತ್ತದೆ. |
| 4 | ಅಶೋಕನಗರ ಪೊಲೀಸ್ ಠಾಣೆ ಮೊ ಸಂ 287/2020 ಕಲಂ 406, 420 ಐಪಿಸಿ | 19.11.2020 | ಶ್ರೀಮತಿ ಯಶೋದಾ ದೇವಿ, | ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ವಿಚಾರಣೆಯಲ್ಲಿರುತ್ತದೆ. |
| 5 | ಕಾಟನ್‌ಪೇಟೆ ಪೊಲೀಸ್ ಠಾಣೆ ಮೊ ಸಂ 153/2020 ಕಲಂ 120 (ಬಿ), 379, 420, 465, 468, 471, ರೆ:ವಿ 34 ಐಪಿಸಿ & 66, 66(ಸಿ), 66(ಡಿ), ಐಟಿ ಆಕ್ಟ್, | 27.11.2020 | ಶ್ರೀಧರ್ ಕೆ ಪೂಜಾರ್, ಪಿಐ ಸಿಸಿಬಿ, ಬೆಂಗಳೂರು ನಗರ | ಮಾನ್ಯ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ವಿಚಾರಣೆಯಲ್ಲಿರುತ್ತದೆ. |
| 6 | ಸೈಬರ್ ಕ್ರೈಂ ಪೊಲೀಸ್ ಠಾಣೆ ಮೊ ಸಂ 45/2020 ಕಲಂ 420 ರೆ:ವಿ 34 ಐಪಿಸಿ, & ಕಲಂ 66(ಸಿ), 66(ಡಿ)ಐಟಿ ಆಕ್ಟ್, | 23.12.2020 | ಶ್ರೀ ಅರವಿಂದ್ ಬಾಲಕೃಷ್ಣ | ಮಾನ್ಯ ನ್ಯಾಯಾಲಯದಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದು, ವಿಚಾರಣೆಯಲ್ಲಿರುತ್ತದೆ. |
| 7 | ಸಿಐಡಿ ಸೈಬರ್ ಕ್ರೈಂ ಪೊಲೀಸ್ ಠಾಣೆ ಮೊ ಸಂ 02/2021 ಕಲಂ 66(ಸಿ), 66(ಡಿ) ರೆ:ವಿ 384 ಐಪಿಸಿ | 29.01.2021 | ಶ್ರೀ ಗಿರೀಶ್ ನವಡ, | ಸಿಐಡಿ ತನಿಖೆಯಲ್ಲಿರುತ್ತದೆ. |